DFA/691556

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1565
ಸದಸ್ಯರ ಹೆಸರು : ಹೆಚ್.ಎಂ. ರಮೇಶ್ ಗೌಡ
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 11.03.2022.

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ಸೇವಾ ವಲಯವಾಗಿರುವ ಸಾರಿಗೆ ಇಲಾಖೆಯ ನಷ್ಟವನ್ನು ಭರಿಸಲು ಸರ್ಕಾರ ಇಲಾಖೆಗೆ ಧನ ಸಹಾಯ ನೀಡಿದೆಯೇ; ನೀಡಿದ್ದಲ್ಲಿ, ಸಂಪೂರ್ಣ ವಿವರ ನೀಡುವುದು;</td><td>ರಾಜ್ಯದ ನಾಲ್ಕೂ ಸಾರಿಗೆ ಸಂಸ್ಥೆಗಳು ಕೋವಿಡ್-19ರ ಹಿನ್ನೆಲೆಯಲ್ಲಿ ಅನುಭವಿಸಿದ ನಷ್ಟವನ್ನು ಭರಿಸಲು, ಸಂಸ್ಥೆಗಳ ಅಧಿಕಾರಿ/ ಸಿಬ್ಬಂದಿಗಳ ವೇತನ ವೆಚ್ಚಕ್ಕಾಗಿ ಬಿಡುಗಡೆ ಮಾಡಿರುವ ಸಹಾಯಧನದ ವಿವರ ಈ ಕೆಳಕಂಡಂತಿದೆ:
<table>
<tr><th rowspan="2">ನಿಗಮ</th><th colspan="2">ವೇತನ ವೆಚ್ಚಕ್ಕಾಗಿ ಬಿಡುಗಡೆ ಮಾಡಿರುವ ಅನುದಾನ</th></tr>
<tr><th>2020-21</th><th>2021-22</th></tr>
<tr><td>ಕ.ರಾ.ರ.ಸಾ.ನಿಗಮ</td><td>56355.00</td><td>23586.00</td></tr>
<tr><td>ಬೆಂ.ಮ.ಸಾ.ಸಂಸ್ಥೆ</td><td>69055.00</td><td>43005.00</td></tr>
<tr><td>ವಾ.ಕ.ರ.ಸಾ.ಸಂಸ್ಥೆ</td><td>36941.00</td><td>20804.00</td></tr>
<tr><td>ಕ.ಕ.ರ.ಸಾ.ನಿಗಮ</td><td>32989.00</td><td>13414.00</td></tr>
<tr><td>ಒಟ್ಟು</td><td>195340.00</td><td>100809.00</td></tr>
</table>
ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ 2021-22ನೇ ಸಾಲಿನಲ್ಲಿ ಸಂಸ್ಥೆಯು ಬಾಕಿ ಉಳಿಸಿಕೊಂಡಿದ್ದ ಹೊಣೆಗಾರಿಕೆಯನ್ನು ತೀರುವಳಿ ಮಾಡಲು ರೂ.400.00 ಕೋಟಿಗಳ ಧನ ಸಹಾಯವನ್ನು ಬಿಡುಗಡೆ ಮಾಡಿದೆ.</td></tr>
<tr><td>ಆ.</td><td>ನಿಗದಿತ ಅವಧಿಯಲ್ಲಿ ಸಾರಿಗೆ ನೌಕರರ ವೇತನ ಪರಿಷ್ಕರಣೆ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮಗಳನ್ನು</td><td>ಸರ್ಕಾರದ ಗಮನಕ್ಕೆ ಬಂದಿದೆ.<br>ರಾಜ್ಯ ರಸ್ತೆ ಸಾರಿಗೆ ನೌಕರರ ವೇತನವನ್ನು ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಪರಿಷ್ಕರಿಸುವ ಪದ್ಧತಿ ಜಾರಿಯಲ್ಲಿದೆ ಮತ್ತು ದಿನಾಂಕ.01.01.2020ರಿಂದ ವೇತನ ಪರಿಷ್ಕರಣೆ ಆಗಬೇಕಾಗಿದ್ದು, ಕೋವಿಡ್-19ರ ಹಿನ್ನೆಲೆಯಲ್ಲಿ ನಿಗಮಗಳು ಅನುಭವಿಸುತ್ತಿರುವ ಆರ್ಥಿಕ ಸಂಕಷ್ಟದ ಹಿನ್ನಲೆಯಲ್ಲಿ, ವೇತನ</td></tr>
</table>

| | | |
|---|---|---|
| | ಕೈಗೊಳ್ಳಲಾಗಿದೆ; | ಪರಿಷ್ಕರಣೆ ಬೇಡಿಕೆಯ ಕುರಿತು ಆರ್ಥಿಕ ಪರಿಸ್ಥಿತಿಯನ್ನು ಪರಿಶೀಲಿಸಿ ಸೂಕ್ತ ತೀರ್ಮಾನವನ್ನು ತೆಗೆದುಕೊಳ್ಳಲಾಗುವುದು. |
| ಇ. | ಸಾರಿಗೆ ನಿಗಮಗಳನ್ನು ವಿಲೀನ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; ಹಾಗಿದ್ದಲ್ಲಿ, ಯಾವಾಗ ವಿಲೀನ ಮಾಡಲಾಗುವುದು? | ಪ್ರಸ್ತುತ ಸಾರಿಗೆ ನಿಗಮಗಳನ್ನು ವಿಲೀನ ಮಾಡುವ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ: ಟಿಡಿ 75 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು